ಲಿಖಿತ ಮೂಲಕ ಉತ್ತರಿಸುವ ಪ್ರಶ್ನೆ



ಕರ್ನಾಟಕ ವಿಧಾನ ಪರಿಷತ್ತು

ನೂರ ನಲವತ್ತನೆಯ ಅಧಿವೇಶನ

ಮಂಗಳವಾರ, ದಿನಾಂಕ : 24 ನೇ ಮಾರ್ಚ್, 2020

ನೀರಿನ ಟ್ಯಾಂಕರುಗಳಿಗೆ ಕಾನೂನು ಬಾಹಿರವಾಗಿ ಸ್ಟ್ಯಾಂಪಿಂಗ್ ಮಾಡುತ್ತಿರುವ ಬಗ್ಗೆ

ಶ್ರೀ ಮರಿತಿಬ್ಬೇಗೌಡ(ಶಿಕ್ಷಕರ ಕ್ಷೇತ್ರ):-

1535 (1914) ಮಾನ್ಯ ಆಹಾರ ಮತ್ತು ನಾಗರಿಕ ಸರಬರಾಜು ಹಾಗೂ ಗ್ರಾಹಕರ ವ್ಯವಹಾರಗಳ ಸಚಿವರು ಈ ವಿಷಯಗಳನ್ನು ದಯವಿಟ್ಟು ತಿಳಿಸುವರೆ:-

(ಅ) ಬೆಂಗಳೂರು ಹಾಗೂ ಇತರೆ ಮಹಾನಗರ ಪಾಲಿಕೆ ವ್ಯಾಪ್ತಿಯಲ್ಲಿ ಪೆಸೋ ಮಾನ್ಯತೆ ಪಡೆಯದೆ (ಪೆಟ್ರೋಲಿಯಂ ಅಂಡ್ ಎಕ್ಸ್‌ಪ್ಲೋಸಿವ್ಸ್‌ಸೇಫ್ಟಿ ಆರ್ಗನೈಸೇಷನ್) ಇರುವ ನೀರಿನ ಟ್ಯಾಂಕರುಗಳಿಗೆ ಡೀಸಲ್ ಮತ್ತು ಪೆಟ್ರೋಲ್ ಸರಬರಾಜು ಮಾಡುವಂತೆ ಕಾನೂನು ಮಾಪನಶಾಸ್ತ್ರ ಇಲಾಖೆಯ ಅಧಿಕಾರಿಗಳು ಕಾನೂನು ಬಾಹಿರವಾಗಿ ಸ್ಟ್ಯಾಂಪಿಂಗ್ ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಆ) ನೀರು ಸರಬರಾಜು ಮಾಡುವ ಟ್ಯಾಂಕರುಗಳಲ್ಲಿ ಡೀಸೆಲ್ ಮತ್ತು ಪೆಟ್ರೋಲ್‌ನ್ನು, ರಸ್ತೆ ಹಾಗೂ ಶಾಲಾ ಕಾಲೇಜುಗಳ ಅವರಣದಲ್ಲಿ ಸರಬರಾಜು ಮಾಡುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ;

(ಇ) ಹಾಗಿದ್ದಲ್ಲಿ, ಈ ಸಂಬಂದ ಇದುವರೆವಿಗೂ ಎಷ್ಟು ಅಪರಾಧಗಳನ್ನು ಪತ್ತೆ ಹಚ್ಚಲಾಗಿದೆ ;

(ಈ) ಅಪರಾಧಗಳ ಸಂಬಂಧ ಕೈಗೊಂಡ ಕ್ರಮಗಳೇನು; (ವಿವರ ನೀಡುವುದು)

(ಉ) ಈ ರೀತಿ ನಿಯಮಬಾಹಿರವಾಗಿ ಸ್ಟ್ಯಾಂಪಿಂಗ್ ಮಾಡಿರುವ ಎಷ್ಟು ಅಧಿಕಾರಿ/ನೌಕರರ ಮೇಲೆ ಕ್ರಮ ಕೈಗೊಳ್ಳಲಾಗಿದೆ; (ವಿವರ ನೀಡುವುದು)

(ಊ) ನಿಯಮಬಾಹಿರ ಚಟುವಟಿಕೆಯನ್ನು ಕಟ್ಟುನಿಟ್ಟಾಗಿ ತಡೆಗಟ್ಟಲು ಸರ್ಕಾರ ಕೈಗೊಂಡ ಕ್ರಮಗಳೇನು ? (ವಿವರ ನೀಡುವುದು)